ಸದನದಲ್ಲಿ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಶುಕ್ರವಾರ, ದಿನಾಂಕ: 25ನೇ ಸೆಪ್ಟಂಬರ್, 2020

ಸಾರ್ವಜನಿಕ (ಸರ್ಕಾರಿ) ಮತ್ತು ಖಾಸಗಿ ಸಾರಿಗೆಗಳಲ್ಲಿ ಸರಕು ಸಾಗಣೆ ಮೂಲಕ ಮಾದಕ ವಸ್ತುಗಳ ಸಾಗಣಿಕೆ ಕುರಿತು

ಶ್ರೀ ಪಿ.ಆರ್. ರಮೇಶ್ (ನಾಮನಿರ್ದೇಶನ ಹೊಂದಿದವರು)

68 (788) ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಸಾರ್ವಜನಿಕ (ಸರ್ಕಾರಿ) ಹಾಗೂ ಖಾಸಗಿ ಸಾರಿಗೆಗಳಲ್ಲಿ ತಪಾಸಣೆ ಆಗದ ಸರುಕು ಸಾಗಣೆ ಮೂಲಕ ಮಾದಕ ವಸ್ತುಗಳು ರಾಜ್ಯಾದ್ಯಂತ ಶೈಕ್ಷಣಿಕ, ಸಿನಿಮಾ ರಂಗ ಮತ್ತು ಸಾರ್ವಜನಿಕ ವಲಯಗಳಲ್ಲಿ ವ್ಯಾಪಕವಾಗಿ ಹರಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಸಾರಿಗೆ ವಾಹನಗಳಲ್ಲಿ ಬರುವ ಸರಕು ಸಾಗಣೆಗಳನ್ನು ಸೂಕ್ತ ರೀತಿಯಲ್ಲಿ ತಪಾಸಣೆ ನಡೆಸಲು ಸರ್ಕಾರ ತೆಗೆದುಕೊಂಡ ಕ್ರಮವೇನು; (ವಿವರ ನೀಡುವುದು)

(ಇ) ಪ್ರಮುಖವಾಗಿ ಗಡಿಭಾಗಗಳಲ್ಲಿ ಕಟ್ಟೆಚ್ಚರ ವಹಿಸಲು ಮತ್ತು ಮಾದಕ ವಸ್ತುಗಳ ಸಾಗಣೆಯನ್ನು ತಡೆಯಲು ಸಾರಿಗೆ ಇಲಾಖೆಯಿಂದ ವಿವಿಧ ಇಲಾಖೆಗಳ ಜೊತೆಗೂಡಿ ಕಾರ್ಯಪಡೆ ರಚನೆಗೆ ಸರ್ಕಾರ ಚಿಂತಿಸಿದೆಯೇ; (ವಿವರ ನೀಡುವುದು)

(ಈ) ಸಾರ್ವಜನಿಕ ಸಂಚಾರದ ಪರವಾನಗಿ ಪಡೆದು ಹಲವು ಖಾಸಗಿ ಬಸ್ಸುಗಳು ಸರಕು ಸಾಗಣೆಯನ್ನು ಹೆಚ್ಚಾಗಿ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ಕೈಗೊಂಡ ಕ್ರಮವೇನು? (ವಿವರ ನೀಡುವುದು)